# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1131

ಸದಸ್ಯರ ಹೆಸರು : ಶ್ರೀ ಇಕ್ಬಾಲ್ ಅಹ್ಮದ್ ಸರಡಗಿ

ಉತ್ತರಿಸುವ ಸಚಿವರು : ಉಪ ಮುಖ್ಯಮಂತ್ರಿಗಳು ಹಾಗೂ ಸಾರಿಗೆ ಸಚಿವರು

ಉತ್ತರಿಸುವ ದಿನಾಂಕ : 13-03-2020

| ಕ್ರ.ಸ | ಪ್ರಶ್ನೆ | ಉತ್ತರ |
|---|---|---|
| ಅ | ರಾಜ್ಯದ ವಿವಿಧ ರಸ್ತೆ ಸಾರಿಗೆ ನಿಗಮಗಳ ನೌಕರರ ವರ್ಗಾವಣೆ ನೀತಿಯು ಯಾವಾಗ ಜಾರಿಗೆ ಬಂದಿದೆ; | ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮವು ನೌಕರರ ವರ್ಗಾವಣೆಗೆ ವರ್ಗಾವಣಾ ಮಾರ್ಗಸೂಚಿಯನ್ನು ಜಾರಿಗೆ ತರಲಾಗಿದೆ. ಸುತ್ತೋಲೆ ಸಂಖ್ಯೆ :1545, ದಿನಾಂಕ: 29-04-2015 ರನ್ವಯ ಜಾರಿಗೆ ಬಂದಿರುತ್ತದೆ. |
| ಆ | ಒಂದು ನಿಗಮದಿಂದ ಇನ್ನೊಂದು ನಿಗಮಕ್ಕೆ ನೌಕರರು ವರ್ಗಾವಣೆ ಹೊಂದಲು ನೀಡಿರುವ ಮಾನದಂಡಗಳೇನು; | ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮದಲ್ಲಿ ಸುತ್ತೋಲೆ ಸಂಖ್ಯೆ : 1545, ದಿನಾಂಕ: 29-04-2015 ಮತ್ತು 1565 ದಿನಾಂಕ: 26-09-2015 ರನ್ವಯ ಒಂದು ನಿಗಮದಿಂದ ಇನ್ನೊಂದು ನಿಗಮಕ್ಕೆ ನೌಕರರು ವರ್ಗಾವಣೆಗೆ ಇರುವ ಮಾನದಂಡಗಳನ್ನು ನಿಗದಿಪಡಿಸಲಾಗಿರುತ್ತದೆ.<br>ಪ್ರಸ್ತುತ, ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮದ ಅಧಿಕಾರಿಗಳು/ದರ್ಜೆ-3 ಮೇಲ್ವಿಚಾರಕ ಸಿಬ್ಬಂದಿಗಳನ್ನು ಅಂತರ ನಿಗಮಗಳಿಗೆ ನಿಯೋಜನೆ ಮೇರೆಗೆ ವರ್ಗಾವಣೆ ಮಾಡಲು ಅವಕಾಶವಿರುತ್ತದೆ. ದರ್ಜೆ-3 ಮೇಲ್ವಿಚಾರಕೇತರ ಮತ್ತು ದರ್ಜೆ-4 ಸಿಬ್ಬಂದಿಗಳನ್ನು ಅಂತರ ನಿಗಮಗಳಿಗೆ ವರ್ಗಾವಣೆ ಮಾಡಲು ಅವಕಾಶವಿರುವುದಿಲ್ಲ. |
| ಇ | ಸಾರಿಗೆ ಕಾರ್ಮಿಕರು ತಮ್ಮ ಮಾತೃ ಜಿಲ್ಲೆಗೆ ವರ್ಗಾವಣೆ ಬಯಸುವುದು ನ್ಯಾಯ ಸಮ್ಮತವೆಂದು ಸರ್ಕಾರ ಭಾವಿಸಿದೆಯೇ; | ಸಾರಿಗೆ ನಿಗಮಗಳ ನೌಕರರನ್ನು ತಮ್ಮ ಮಾತೃ ಜಿಲ್ಲೆಗೆ ವರ್ಗಾವಣೆ ಮಾಡುವ ಸಂಬಂಧ ಸರ್ಕಾರದ ಆದೇಶ ಸಂಖ್ಯೆ: ಸಾರಿಇ 45 ಸಾಸಂಸೇ 2016, ದಿನಾಂಕ:30.3.2017 ರನ್ವಯ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ, ಬೆಂ.ಮ.ಸಾ.ನಿಗಮ, ಈ.ಕ.ರ.ಸಾ.ನಿಗಮ ಮತ್ತು ವಾ.ಕ.ರ.ಸಾ.ಸಂಸ್ಥೆಗಳ ದರ್ಜೆ-3 ಮೇಲ್ವಿಚಾರಕೇತರ ಮತ್ತು ದರ್ಜೆ-4 ರ ನೌಕರರಿಗೆ ಒಂದು ಬಾರಿ ಪರಿಹಾರವಾಗಿ ಅಂತರ ನಿಗಮ ವರ್ಗಾವಣೆಗೆ ಅವಕಾಶ ಕಲ್ಪಿಸಿ, ಅದರಂತೆ ಸೇವಾ ಜ್ಯೇಷ್ಠತೆ ಹಾಗೂ ಖಾಲಿ ಹುದ್ದೆ ಲಭ್ಯತೆಗನುಗುಣವಾಗಿ 3936 ನೌಕರರನ್ನು ಅಂತರ ನಿಗಮ ವರ್ಗಾವಣೆಯನ್ನು ಮಾಡಲಾಗಿರುತ್ತದೆ.<br>ಪ್ರಸ್ತುತ, ದರ್ಜೆ-3 ಮೇಲ್ವಿಚಾರಕೇತರ ಮತ್ತು ದರ್ಜೆ-4 ಸಿಬ್ಬಂದಿಗಳನ್ನು ಅಂತರ ನಿಗಮಗಳಿಗೆ ವರ್ಗಾವಣೆ ಮಾಡಲು ಅವಕಾಶವಿರುವುದಿಲ್ಲ. |
| ಈ | ಅಂತಹ ನೌಕರರನ್ನು ಮಾತೃ ಜಿಲ್ಲೆಗೆ ವರ್ಗಾವಣೆ ಮಾಡಲು ಸರ್ಕಾರದ ಕ್ರಮ ಕೈಗೊಳ್ಳುವುದೆ? | |

ಸಂಖ್ಯೆ: ಟಿಡಿ 86 ಟಿಸಿಕ್ಯೂ 2020

(ಲಕ್ಷ್ಮಣ ಸಂಗಪ್ಪ ಸವದಿ)
ಉಪ ಮುಖ್ಯಮಂತ್ರಿಗಳು ಹಾಗೂ
ಸಾರಿಗೆ ಸಚಿವರು